ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ಹಣ್ಣು, ಹೂ ತರಕಾರಿ ಬೆಳೆದ ರೈತರಿಗೆ ಆದ ನಷ್ಟದ ಕುರಿತು

ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) :-

968(1034) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಲಾಕ್‌ಡೌನ್ ಸಂದರ್ಭದಲ್ಲಿ ಹೂವು, ಹಣ್ಣು ಮತ್ತು ತರಕಾರಿ ಬೆಳೆದ ರೈತರಿಗೆ ಆದ ನಷ್ಟದ ಪ್ರಮಾಣ ಎಷ್ಟು;

(ಆ) ಪಾಲಿ ಹೌಸ್‌ಬೆಳೆಗಾರರಿಗೆ ಲಾಕ್‌ಡೌನ್ ಸಂದರ್ಭದಲ್ಲಿ ಆದ ನಷ್ಟಕ್ಕೆ ಸರ್ಕಾರದಿಂದ ಪರಿಹಾರ ಘೋಷಣೆಯಾಗಿದೆಯೇ; ಹಾಗಿದ್ದಲ್ಲಿ, ಪ್ರತಿ ರೈತರಿಗೆ ನೀಡಿದ ಮೊತ್ತ ಎಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಇ) ಲಾಕ್ ಡೌನ್ ಸಂದರ್ಭದಲ್ಲಿ ಬೆಳೆ ನಷ್ಟ ಅನುಭವಿಸಿದ ರೈತರಿಗೆ ಪರಿಹಾರ ನೀಡಲು ಮಾರ್ಗಸೂಚಿಗಳೇನು;

(ಈ) ಬೆಳೆ ಸಮೀಕ್ಷೆಯಲ್ಲಿ ನಮೂದಾಗದ ಬೆಳೆಗಳಿಗೆ ಪರಿಹಾರ ನೀಡಲು ಅವಕಾಶವಿದೆಯೇ; ಅವಕಾಶ ಇದ್ದಲ್ಲಿ, ರೈತರು ಅನುಸರಿಸಬೇಕಾದ ಕ್ರಮಗಳೇನು ?